# ಶ್ರೀ ಯೋಗಿ ನಾರಾಯಣಾಚಾರ್ಯ ಕೃತ
# ಶ್ರೀ ಇಭರಾಮಪುರಾಧೀಶ ಸ್ತೋತ್ರ ಮಾಲಾ

**ಶ್ರೀಮದ್ ಯೋಗಿ ನಾರಾಯಣಾಚಾರ್ಯ ಕೃತೋಽಯಂ ಗ್ರಂಥಃ**
**ಶ್ರೀ ಭಾರತೀಶಾಯ ನಮಃ**

ನತ್ವಾ ಶ್ರೀಮದುಪಾಧ್ಯಾಯ ರಾಮಾಚಾರ್ಯಾಖ್ಯ ಸದ್ಗುರುಮ್ ।
ಇಭರಾಮಪುರಾಚಾರ್ಯ ಮಹಾತ್ಮ್ಯಂ ಕಿಂಚಿದುಚ್ಯತೇ ॥ ೧ ॥

ಶ್ರುತಿ ಸ್ಮೃತಿ ಪುರಾಣೋಕ್ತಿ ಸಮ್ಮತಂ ಸನ್ಮತಂ ಸದಾ ।
ಸ್ವಪರಾನುಭವ ಸ್ಪಷ್ಟ ಫಲ ಪ್ರತ್ಯಕ್ಷ ಲಕ್ಷಣೈಃ ॥ ೨ ॥

ಸಂಯುಕ್ತಂ ಯುಕ್ತಿ ಭಿರಪಿ ಪ್ರತಿಪಾದ್ಯಂ ಪ್ರತಿಕ್ಷಣಮ್ ।
ನಿರಂಕುಶಾನ್ವಯೇ ತಸ್ಮಾತ್ ಏತೇಷ್ವೇವೋಕ್ತ ವಸ್ಫುಟಂ ॥ ೩ ॥

ಜಾಯತೇ ನಾತ್ರ ಸಂದೇಹಃ ಪ್ರಕಟೋಕ್ತಿ ಸಮರ್ಥತಃ ।
ಅಥ ಶ್ರುತಿ ಸ್ಮೃತಿ ಗ್ರಂಥ ನಾಮಾನಿ ಕಥಯಾಮ್ಯಹಂ ॥ ೪ ॥

ಯೈರ್ಗುರೋರ್ಯಸ್ಯ ಮಹಾತ್ಮ್ಯಂ ಪ್ರಕಾಶಿತಮಹರ್ನಿಶಮ್ ।
ಶ್ರೀವಾಯು ಕೂರ್ಮ ಪುರಾಣ ಸ್ಕಂಧ ಪಾದ್ಮಾದಿಶಸ್ತಥಾ ॥ ೫ ॥

ಶ್ರೀಮದ್ಗೀತಾ ಭಾಗವತ ಛಾಂದೋಗಾಖ್ಯ ವರಾಹತಃ ।
ಛಾಂದೋಗ್ಯ ಋಕ್ ಬ್ರಹ್ಮಸೂತ್ರ ತೈತ್ತರೀಯಾಖ್ಯ ಭಾಷ್ಯತಃ ॥ ೬ ॥

ತಾತ್ಪರ್ಯಾಚ್ಚ ಚತುರ್ಥಾದ್ಯೈಃ ಅನುವ್ಯಾಖ್ಯಾನತಸ್ತಥಾ ।
ಭಾರತಸ್ಯ ಸಭಾ ಪರ್ವಣಿ ಮಧ್ಯಾದ್ಹಾರೀತಃ ಸ್ಮೃತಿಃ ॥ ೭ ॥

ತೈತ್ತರೇಯೋಪನಿಷದಾತ್ ಸುಮಧ್ವ ವಿಜಯಾದಪಿ ।
ತಾತ್ಪರ್ಯ ನಿರ್ಣಯಾತ್ ಶ್ರೀಮದ್ ಭಾರತಸ್ಯಚ ಕಾರ್ತಿಕಾತ್ ॥ ೮ ॥

ಪಂಚರಾತ್ರಸ್ಯ ಮಹಾತ್ಮ್ಯೆ ಕೃಷ್ಣಾಮೃತ ಮಹಾರ್ಣವೇ ।
ಟೀಕಾಯಾಂ ವಿಜಯಧ್ವಜ್ಯಾಂ ವಿಷ್ಣುಧರ್ಮೋತ್ತರಾದಪಿ ॥ ೯ ॥

ಸಂಧ್ಯಾವಂದನ ಮಂಜರ್ಯಾಂ ಗಾರುಡಾಖ್ಯ ಪುರಾಣತಃ ।
ಏತೈಃ ಉದಾಹೃತೈಃ ವಾಖ್ಯೈಃ ಅನ್ವಯೋಽತ್ರ ಸುಸಮ್ಮತಃ ॥ ೧೦ ॥

ಪೂರ್ವೋಕ್ತ ಕಾರಣೈಃ ಭೂಯಃ ಚರಿತಂ ವಚ್ಮಿ ವಿಸ್ತರಾತ್ ।
ಸಯೇನ ಸರ್ವ ಸಂಶಯ ಮೂಲ ಛೇದೋ ಭವೇ ದಲಮ್ ॥ ೧೧ ॥

ಯೇನಾತ್ರ ನಿಜ ಯೋಗೇನ ಪ್ರಯತ್ನೇನ ವಿನಾಪಿ ತು ।
ಅತ್ಯಂತಾಚಾರ ಹೀನಾಶ್ಚ ಮೂಢಾಃ ಬಾಲಾಃ ಶಠಾಃ ಅಪಿ ॥ ೧೨ ॥

ದರಿದ್ರಾಃ ಅಲ್ಪಧಿಯೋಽಲ್ಪ ವಂಶೋದ್ಭವಾಶ್ಚ ಮಾನವಾಃ ।
ಸದಾಚಾರಶ್ಚ ಸಜ್ಜನಾಃ ಪ್ರೌಢಾಃ ಪ್ರಾಜ್ಞಾಶ್ಚ ಸಾಧವಃ ॥ ೧೩ ॥

ಭಾಗ್ಯವಂತೋಽತ್ಯಂತ ಮಾನ್ಯಾಃ ಕುಲೀನ ಜನ ವಂದಿತಾಃ ।
ಕ್ರಮಾದೇತೇ ಕೃತಾಲೋಕೆ ದೃಷ್ಟಾಸ್ಸಷ್ಟ ಮನೇಕಶಃ ॥ ೧೪ ॥

ತಥಾ ಶ್ರೀ ಗುರುಣಾನೇನ ಭಾರತೀಶಾಖ್ಯ ಯೇನಿಶಮ್ ।
ನಾನೋಪಾಯೈರಪ್ಯಸಾಧ್ಯಂ ಚಿಕಿತ್ಸಾನುತ್ಸಾರಿತಾಸ್ತಥಾ ॥ ೧೫ ॥

ಕುಷ್ಠಾದ್ಯರಿಷ್ಟ ರೋಗಾದ್ಯಾಃ ಗಂಧಕಾಷ್ಠೈಶ್ಚ ಭಸ್ಮನಾ ।
ಮೃತ್ತಿಕಾ ಧೂಪ ಧೂಮಾದಿ ಸಾಧನೈರ್ನಾಶಿತಾಃ ಸತಾಂ ॥ ೧೬ ॥

ಹಸ್ತಪಾದಾದ್ಯವಯ ವೈ ರೂನಾಃ ಪೂರ್ಣತ್ವಚಿತ್ ಕೃತಾಃ ।
ದಿವ್ಯ ನೇತ್ರಾಃ ಕೃತಾಃ ಯೇನ ಕೇನಚಿನ್ನಷ್ಟ ದೃಷ್ಟಯಃ ॥ ೧೭ ॥

ಜನ್ಮಾಂಧೊಪ್ಯೇ ಕದಾ ಕಶ್ಚಿತ್ ಪರಮ ಹಸ್ತೇನ ದೃಷ್ಟಿಮಾನ್ ।
ಕಿಂಚಿತ್ ಕಾಲಂ ವಿಧಾಯಾ ಯಥಾಪೂರ್ವಮಕಲ್ಪಯತ್ ॥ ೧೮ ॥

ಯೇನ್ಯೈ ಕಾಂತ್ಯೇಽಲ್ಪ ವಚನ್ಯೈಃ ದುಷ್ಪಂಡಿತಾಶ್ಚ ಖಂಡಿತಾಃ ।
ಅಶಕ್ತಾ ಶ್ಲೋಕಕರಣೆ ಸುಶಕ್ತಾಃಯೇನ ವೈಕೃತಾಃ ॥ ೧೯ ॥

ಕಶ್ಚಿದೇಕೋ ತೀರ್ಥಯಾತ್ರಾ ಪ್ರಸ್ಥಿತಃ ಸನ್ ಸಮಾಗತಃ ।
ಸ್ವಶೀರ್ಷ ನಿಕಟೇ ರಾತ್ರೌ ಸ್ವಾಪಯಿತ್ವಾ ತಮೆ ಮಯಃ
(ಸ್ವಾಪಯಾಮಾಸ ತಂ ಗುರುಃ) ॥ ೨೦ ॥

ಪ್ರಾತಃ ಪರ್ಯಂತಮಖಿಲ ಯಾತ್ರಾ ಗಮನ ಮಾದಿತಃ ।
ಕ್ರಮಾತ್ ಗ್ರಾಮಾದಿಕಂ ಯಾವತೀರ್ಥ ಸ್ತೋಮಮನೇಕಶಃ ॥ ೨೧ ॥

ಯಥಾ ಸಂಖ್ಯಾಂ ಯಥಾಖ್ಯಾನಂ ಯತ್ರ ಯತ್ರ ಯಥಾ ವಿಧಿ ।
ತತ್ರ ತತ್ರ ತಥಾ ಕಾರ್ಯಂ ವಿಧಾಯ ಪುನರಾಗತಃ ॥ ೨೨ ॥

ಇತ್ಯಾದಿಕಂ ಸ್ವಪ್ನ ಮಧ್ಯೆ ದರ್ಶಯಿತ್ವಾಖಿಲಂ ಸ್ವಯಮ್ ।
ಉತ್ಥಾಪ್ಯ ತಂ ಪುನಸ್ತಸ್ಯ ಮುಖಾದುಚ್ಚಾರಯನ್ ಕ್ರಮಾತ್ ॥ ೨೩ ॥

ತತ್ರಯಲ್ಲಜ್ಜಯಾ (ತತ್ರಯದ್ವಿಸ್ಮೃತ್ಯಾ) ನೋಕ್ತಂ ತದಪಿ ಸ್ಮಾರಯನ್ ಸ್ತತಃ ।
ಲೇಖಯಾಮಾಸ ತತ್ಸರ್ವಂ ದೃಷ್ಟ ಲೋಕಾಃ ಸುವಿಸ್ಮಿತಾಃ ॥ ೨೪ ॥

ದೇವತಾ ದರ್ಶನಾದೀನಿ ತಥಾನ್ಯೇಷಾಂ ಚ ಕಾನಿಚಿತ್ ।
ಅದೃಷ್ಟಾಗತ ಶಾಸ್ತ್ರಾರ್ಥ ಕಥನಂ ಕುತ್ರಚಿತ್ ಸತಾಮ್ ॥ ೨೫ ॥

ಅಕರೋತ್ ಸ್ವಪ್ನ ಮಧ್ಯೆ ವಾ ಜಾಗ್ರತಾವಾಪಿ ಯತ್ ಸ್ಫುಟಮ್ ।
ಮೋಚನಂ ದುಷ್ಟ ಬುದ್ಧೀನಾಂ ದರ್ಶನಾಲಾಪಕೋಽಕರೋತ್ ॥ ೨೬ ॥

ಅನೇಕಕಾರ ಕಾರ್ಯೈಃ ಯಃ ಸ್ವಾತ್ಮಾನಂ ಬಹುದಾ ನೃಣಾಮ್ ।
ದರ್ಶಯತ್ವೇಷ್ಟ ಕರ್ತಾ ಭೂತ್ ಯತ್ರ ಕುತ್ರಾಪಿ ವರ್ತಿನಾಮ್ ॥ ೨೭ ॥

ಮಂತ್ರಾಕ್ಷತ ಸಮಾಯುಕ್ತೇ ಸಂಪುಟೆ ಯತ್ಕರಾರ್ಚಿತೆ ।
ಪ್ರತಿಮಾಽಭೂತ್ಸಾರ್ಚಕಾನಾಂ ಕ್ವಚಿತ್ ಕಾಲಾಂತರೇಣ ವೈ ॥ ೨೮ ॥

ಸ್ವಪ್ನೇಽಪಿ ದತ್ತ ವಸ್ತೂನಿ ಕೇಷಾಂಚಿತ್ ಯತ್ರ ಕುತ್ರಚಿತ್ ।
ಪ್ರತ್ಯಕ್ಷಾಣಿ ಪ್ರಬೋದೇಽಪ್ಯ ಜಾತಾನಿ (ದೃಷ್ಟಾಣಿ) ಜಗತೀ ತತಿ ॥ ೨೯ ॥

ಯಃ ಸಪ್ತ ಜನ್ಮತಃ ಕರ್ಮ ವಿಪಾಕ ಮಖಿಲಂ ಕಿಲ ।
ಸ್ಪಷ್ಟ ದೃಷ್ಟ ಮಿವ (ಸದ್ಯಃ) ಪ್ರಾಹ ಮಹತಾಂ ಇಹ ಶೃಣ್ವತಾಮ್ ॥ ೩೦ ॥

ಯಃ ಪಿಶಾಚಾನ್ ಮಹಾಮಂತ್ರ ವಿದಾಮಪತಿ ಭಯಪ್ರದಾನ್ ।
ಸಹಜೋಕ್ತ್ಯಾ ಪ್ರಶಮಯನ್ ಧಾವಯಾಮಾಸ ತಾನ್ತದಾ ॥ ೩೧ ॥

ಬ್ರಹ್ಮಹತ್ಯಾದಿ ದೋಷೇಭ್ಯೋ ಉತ್ಸಾರ್ಯಾನಿತಿ ವಿಶ್ವಜಿತ್
(ಮೋಚಯಾಮಾಸ ತಾನ್ ಜನಾನ್)।
ಕಾಂಶ್ಚಿತ್ ಖಲಾನ್ ಕ್ರೂರಕರ್ಮ ವಿವಶಾನಪತಿ ಪೀಡಕಾನ್ ॥ ೩೨ ॥

ವಶೀಕೃತ್ಯ ಸ್ವವಚಸಾ ನಿಯಮ್ಯಾ (ಶಾಂತಯತ್) ಸ್ವಾಪಯನ್ ಪ್ರಭುಃ ।
ಯಸ್ತ್ವೇತ ಪ್ರಾಕರ್ಮ ಯದ್ಯತ್ ಪ್ರಕಟೀಕೃತ್ಯ ತನ್ಮುಖಾನ್ ॥ ೩೩ ॥

ಕರ್ತುಶ್ಚ ವಚನಾಲ್ಲೋಕೆ ವಿವೇಕೇನ ನಿದೇಶಕೃತ್ ।
ಚಿತ್ರಂ ಚೈತತ್ ಇದಂ ಲೋಕೇ ಕಸ್ಯಚಿತ್ ಸ್ಯಾದಪಿ ಕ್ವಚಿತ್ ॥ ೩೪ ॥

ಯಸ್ತ್ವನಾದಿ ಪ್ರತಿಚ್ಛಿನ್ನ ಸ್ವರೂಪಂ ಲೀಲಯಾ ದಿಶತ್ ।
ಪರೋಕ್ಷ ವರ್ತಿನಾ ಸಮ್ಯಕ್ ಮುಕ್ತಿ ಯೋಗ್ಯಂ ಇತಿ ಸ್ಫುಟಮ್ ॥ ೩೫ ॥

ವಿವಿಧಾ ಮೋದ ಸದನ ತನುರ್ಯಸ್ಯ ಯಥೇಚ್ಛಯಾ ।
ವಿನಾಯಾಸೇನ ಕೇನಾಪಿ ನೈವ ಮಾಲೋ ಕಿತಂ ಶ್ರುತಮ್ ॥ ೩೬ ॥

ನದಿ ಪ್ರದೇಶೇ ಹರಿತೋಯಃ ಸ್ನಾನೇನ ಸುಗಂಧಿಮಾನ್ ।
ಸ್ಮೃತಿ ಮಾತ್ರಾಚ್ಛ ಕೇಷಾಂಚಿತ್ ಯತ್ರ ಕುತ್ರಾಪಿ ವಾಸಿನಾಮ್ ॥ ೩೭ ॥

ಅಭೂತ (ಭಾತ) ಪ್ರಭೂತ ಗಂಧಾಢ್ಯಃ ಯತ್ಪತ್ರಾದ್ಯಾಗಮ ನೃಣಾಮ್ ।
ಆ ಸತ್ಯಲೋಕೇ ಪಾತಾಳಾದ ಪಿ ಜ್ಞಾನ ಮನಾಕುಲಮ್ ॥ ೩೮ ॥

ಯಸ್ಯಾಸ್ತಿ ಇತಿ ಅಪಿ ವಿಜ್ಞಾತಂ ಜ್ಞಾನಿಭಿಃ ತತ್ರಸಂಗತಃ ।
ಭಾರತೀಶಾರ್ಚನ ದ್ವಾರೈರ್ವಾಚ್ಯುತಾರ್ಚ್ಯೋಪದೇಶಕಃ
(ರ್ಚನ ದೇಶಿಕಃ) ॥ ೩೯ ॥

ಮೋಕ್ಷ ಮಾರ್ಗೈಕ ಹೇತುತ್ವಂ ದ್ಯೋತಿತಂ ಸ್ವನಿಯೋಗತಃ ।
ಯೇನೇತಿ ಪ್ರಥಿತೆ ಲೋಕೇಶ ವಿಭವಾತ್ಮನಾ ॥ ೪೦ ॥

ತದೇತದಖಿಲಂ ವಕ್ತುಂ ಕ್ಷಮಾನಾಪಿ ವಿಚಕ್ಷಣ।
ಯಸ್ಸೇದಂ ವಿವಿಧಂ ವೃತ್ತಂ ಅಚಿಂತ್ಯಾದ್ಭುತ ಪೂರಿತಾಮ್ ॥ ೪೧ ॥

ಸಚ್ಛಾಸ್ತ್ರ ಸಮ್ಮತಂ ಸದ್ಭಿಃ ಶ್ಲಾಘ್ಯಂ ಮೃಗ್ಯಂ ಜನ್ಯೈಃ ಮುಹುಃ।
ಅನುಭೂತಂ ಶ್ರುತಂ ದೃಷ್ಟಂ ಸ್ಪಷ್ಟ ಶಿಷ್ಟೈ ರನುಷ್ಠಿತಮ್ ॥ ೪೨ ॥

ತಸ್ಮಾತ್ಸರ್ವದಾತ್ಯಂತ ನಿರ್ಬಾಧತಯಾ ಪ್ರೋಕ್ತೋಕ್ತಿ ಯುಕ್ತಿಭಿಃ।
ವಿದ್ಧಿಃ ಸಮನ್ವಯೋ ಜ್ಞೇಯಃ ಕೃಷ್ಣಾರ್ಯೇಽಸ್ಮಿನ್ ಗುರಂವರೇ ॥ ೪೩ ॥

ಯಹ ಮಹಾತ್ಮ್ಯಂ ಸೇವ್ಯಂಚ ಸಂಸ್ತುವಂತ್ಯಾ ಕರ್ಣಯೇಜ್ಜನಾಃ।
ಕ್ಷಿಪ್ರಂ ತೇತು ಮಹಾಸ್ಥಾನಂ ಪ್ರಾಪ್ನುವಂತಹ್ಯಂಶಯಃ ॥ ೪೪ ॥

ಜ್ಞಾತ್ವಾ ಏತದೇವ ಯೇ ಲೋಕಾಃ (ದುರ್ಲೋಕಾಃ) ನಿಂದಂತ್ಯ ಪಹಸಂತಿವಾ।
ತೇಽಪಿ ಯಾತ್ಯುತ್ತಮಂ ಸ್ಥಾನಂ ಅಚಿರಾನ್ನಾತ್ರ ಸಂಶಯಃ ॥ ೪೫ ॥

ಭಾನೂದಯೇ ದೃಷ್ಟಿಮಂತೋಃ ಹೃಷ್ಟಾಸ್ಯುಃ ಪ್ರಾಣಿನಃ ಪರೇ।
ದೃಷ್ಟಿಹೀನಾಸ್ತಥಾ ಖಿನ್ನಾಃ ಕಾಂಕ್ಷಂತೇ ಭಾಸ್ಕರದ್ಯುತಿಮ್ ॥ ೪೬ ॥

ಹೃಷ್ಯಂತ್ವಪಿ ಚ ಖಿಂದಂತು ಸಂತೋಽಸಂತೋ ಯಥೇಚ್ಛಯಾ।
ನಾಸ್ತ್ಯೋಪಾಯಸ್ಯ ಯಶಸಃ ತತ್ಫಲಂ ತದನ್ವಿತಮ್ ॥ ೪೭ ॥

ಏತದ್ವಿದ್ವತ್ತಮ ಶ್ರೀಮದುಪಾಧ್ಯಾಯಾಂಘ್ರಿ ಸೇವಿನಾ।
ಶಿಷ್ಯ ಕೋಟಿ ಪ್ರವಿಷ್ಟೇನ ಕೇವಲಾಲ್ಪೀಯ ಸಾತ್ಮನಾ ॥ ೪೮ ॥

ಇಭರಾಮಪುರೋಪಾಖ್ಯ ಕೃಷ್ಣಾರ್ಯ ಮಹಿಮಾಂ ಬುಧೇಃ।
ಏತದಲ್ಪ ತರಂಗಸ್ಯ ವರ್ಣನಂ ಸಮುದೀರಿತಮ್
(ಚ ಕೃತಂ ಮಾಯಾ) ॥ ೪೯ ॥

ಯಥಾಮತಿ (ಸಮರ್ಪಿತಂ) ಸತಾಂ ಭಕ್ತಿ ಮತಾಂ ತೇಷಾಂ ಪದಾಬ್ಜಯೇಃ।
ಇಷ್ಟಾರ್ಥ ಸಾಧನಂ (ಸಾಧಕಂ) ಸತ್ಯಂ (ತಚ್ಚ) ಭಾರತೀಶ ಪ್ರಸಾದತಃ ॥ ೫೦ ॥

ಶ್ರೀ ಹರಿರ್ದಯಾದೀನ ವತ್ಸಲಃ (ಶ್ರೀ ಹರಿಂ ದಯಾಸಾದ್ರಂ) ಸತತ
ಪ್ರತ್ಯಹಂಮಮ।
ಯಃ ಪುಮಾನನು ಸಂಧಾಯ ಭಾವ(ವೃತ್ತಂ) ಮಸ್ಯ ಗುರೋರ್ಹೃದಿ ॥ ೫೧ ॥

ನಿಧಾಯ ಮಹಿಮೋಪೇತಂ ಇದಂ ಭಕ್ತ್ಯಾಪಠೇತ್ ಸುಧೀಃ ।
ಶ್ರೀಮಾನ್ ಸುಧೀಮಾನ್ ಸಭವೇತ್ ಪುತ್ರವಾನ್ ರೋಗವರ್ಜಿತಃ ॥ ೫೨ ॥

ಶೃತಿ ಸ್ಮೃತಿ ಪುರಾಣೇತಿಹಾಸ ಪಾಠ ಫಲಂ ಲಭೇತ್ ।
ಸರ್ವ ಕಾರ್ಯೇ ಜಯೀ ಶ್ಲಾಘ್ಯಃ ಸರ್ವಮಾನ್ಯೋ ಭವೇತ್ ಭುವಿ ॥ ೫೩ ॥

ಭುಂಕ್ತೇಽಹ ಸಕಲಾನ್ ಕಾಮಾನ್ ಬಹುಕಾಲ ಮನಾ ಕುಲಮ್ ।
ಸರ್ವಪಾಪ ವಿನಿರ್ಮುಕ್ತಃ ಯಾತಿ ವಿಷ್ಣೋಃ ಪರಂ ಪದಮ್ ॥ ೫೪ ॥

ತಸ್ಮಾತ್ಸರ್ವ ಪ್ರಯತ್ನೇನ ಪಠೇತ್ ಏತತ್ ಸಮಾಹಿತಃ ।
ಸರ್ವ ಸಿದ್ಧಿಮವಾಪ್ನೋತಿ ನಾತ್ರ ಕಾರ್ಯ ವಿಚಾರಣ ॥ ೫೫ ॥

ಅಸ್ಮತ್ ಶ್ರೀಮದುಪಾಧ್ಯಾಯೋಪಾಸ್ಯ ಕೃಷ್ಣಾರ್ಯ ಹೃದ್ಗತಃ ।
ಶ್ರೀಮತ್ ವೆಂಕಟರಾಟ್ ಪ್ರೀತಿಃ ಸ್ಯಾನ್ಮೇ ಬ್ರಹ್ಮಾದಿ ಸಂಸ್ತುತಃ ॥ ೫೬ ॥
(ಬ್ರಹ್ಮಾದಿ ಸಂಸ್ತುತ ಶ್ರೀಮತ್ ವೆಂಕಟರಾಟ್ ಪ್ರಿಯತಾಂ ಮಯಿ)

ಯೋಗಿ ನಾರಾಯಣಾಚಾರ್ಯ ವರ್ಯೇಣ ಕೃತಮಿದಂ ಪಾವನಾತ್
(ಪಾವನಂ ಕೃತಂ) ।
ಪಾವನತಮಂ ಸ್ತೋತ್ರಂ ಸತಾಂ ಉಪಕಾರಾಯ ಅನಿಮಿತ್ತಕೃಪಯಾ ಕಿಲ
॥ ೫೭ ॥

**ಇತಿ ಶ್ರೀ ಯೋಗಿ ನಾರಾಯಣಾಚಾರ್ಯ ವರ್ಯ ವಿರಚಿತ**
**ಶ್ರೀ ಇಭರಾಮಪುರ ಶ್ರೀ ಕೃಷ್ಣಾಚಾರ್ಯ ಸ್ತೋತ್ರಮಾಲಾ ಸಮಾಪ್ತಂ**
**ಶ್ರೀ ಮಧ್ವಾಂತರ್ಗತ ಶ್ರೀ ಕೃಷ್ಣಾರ್ಪಣಮಸ್ತು**
**॥ ಹರಿಃ ಓಂ ॥**

(ವಿದ್ವಾನ್ ಶ್ರೀ ಹನುಮೇಶಾಚಾರ್ಯ ಜಾಲೀಹಾಳ (ಹುನಗುಂದ)
ಅವರಿಂದ ಪರಿಷ್ಕೃತವಾಗಿದೆ)

❖ ❖ ❖

# ಶ್ರೀ ಯೋಗಿ ನಾರಾಯಣಾಚಾರ್ಯ ಕೃತ
# ಶ್ರೀ ಇಭರಾಮಪುರಾಧೀಶ ಸ್ತೋತ್ರಮಾಲಾ
## ಕನ್ನಡ ಭಾವಾನುವಾದ

**ಪೂ**ಜ್ಯರಾದ ಉಪಾಧ್ಯಾಯ ರಾಮಾಚಾರ್ಯರೆಂಬ ಸದ್ಗುರುಗಳಿಗೆ ನಮಸ್ಕಾರ ಮಾಡಿದ ನಂತರ ಶ್ರೀ ಇಭಾರಾಮಪುರಾಚಾರ್ಯರ ಮಹಾತ್ಮ್ಯೆಯನ್ನು ಸ್ವಲ್ಪ ಮಟ್ಟಿಗೆ ಹೇಳಲ್ಪಡುತ್ತದೆ.

ಇವರ ಈ ಮಹಾತ್ಮ್ಯೆ ಶೃತಿ, ಸ್ಮೃತಿ, ಪುರಾಣೋಕ್ತಿಗಳಿಂದ ಯಾವಾಗಲೂ ಸಮ್ಮತವಾಗಿರುವಂತಹುದಲ್ಲದೆ ಸಜ್ಜನರಿಂದ ಮಾನ್ಯವಾಗಿರುವಂತಹುದು. ಇದು ಸ್ವಾನುಭವದಿಂದಲೂ, ಇತರರ ಅನುಭವದಿಂದಲೂ ಸ್ಪಷ್ಟವಾದ ಲಕ್ಷಣಗಳಿಂದಲೂ ಕೂಡಿದೆ. ಯುಕ್ತಿಗಳಿಂದ ಯುಕ್ತವಾಗಿ ಪ್ರತಿಕ್ಷಣದಿಂದಲೂ ಪ್ರತಿಪಾದಿತವಾಗಿರುವ ಈ ಎಲ್ಲಾ ವಿಷಯಗಳೂ ಅವಿರೋಧವಾಗಿ ಯಾವುದೇ ಸಂಶಯಕ್ಕೆ ಎಡೆಯಿಲ್ಲದಂತೆ ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿವೆ. ಯಾವ ಗುರುಗಳ ಮಹಾತ್ಮ್ಯೆಯು ಸದಾ ಶೃತಿ, ಸ್ಮೃತಿ ಪುರಾಣಾದಿ ಗ್ರಂಥಗಳಲ್ಲಿ ಪ್ರಕಟಿಸಿರುವ ಅರ್ಥಗಳಿಂದ ಪುಷ್ಟೀಕೃತವಾಗಿದೆಯೋ ಅಂತಹ ಗ್ರಂಥಗಳ ಹೆಸರುಗಳನ್ನು ಹೇಳುತ್ತೇನೆ.

ಶ್ರೀವಾಯು ಪುರಾಣ, ಕೂರ್ಮ ಪುರಾಣ, ಸ್ಕಾಂದ ಪುರಾಣ, ಪದ್ಮಪುರಾಣ, ಶ್ರೀ ಮದ್ಭಗವದ್ಗೀತಾ, ಶ್ರೀ ಮದ್ಭಾಗವತ, ಛಾಂದೋಗ್ಯ ಉಪನಿಷತ್, ವರಾಹ ಪುರಾಣ, ಋಗ್ಭಾಷ್ಯ, ಬ್ರಹ್ಮಸೂತ್ರ ಭಾಷ್ಯ, ತೈತ್ತರೀಯ ಭಾಷ್ಯ, ಚತುರ್ಥ ತಾತ್ಪರ್ಯ ಅನುವ್ಯಾಖ್ಯಾನ, ಭಾರತ ಸಭಾ ಪರ್ವದ ಮಧ್ಯಭಾಗ, ಹಾರೀತ ಸ್ಮೃತಿ, ತೈತ್ತರೀಯ ಉಪನಿಷತ್, ಸುಮಧ್ವ ವಿಜಯ, ಕಾರ್ತೀಕ ಮಹಾತ್ಮ್ಯೆ,

ಪಂಚರಾತ್ರಾಗಮ, ಕೃಷ್ಣಾಮೃತ ಮಹಾರ್ಣವ, ವಿಜಯ ಧ್ವಜ ಟೀಕಾ, ವಿಷ್ಣು ಧರ್ಮೋತ್ತರ, ಸಂಧ್ಯಾವಂದನ ಮಂಜರಿ ಹಾಗೂ ಗರುಡ ಪುರಾಣ. ಉದಾಹರಿಸಿದ ಈ ಎಲ್ಲಾ ಗ್ರಂಥಗಳ ಪ್ರಮಾಣ ವಾಕ್ಯಗಳಿಂದ ಇವರ ಮಹಾತ್ಮ್ಯೆಯು ಸಮ್ಮತವಾಗಿರುತ್ತದೆ. ಹಿಂದೆ ಹೇಳಿದ ಕಾರಣದಿಂದ ಈ ಗುರುವರ್ಯರ ಮಹಿಮೆಗಳನ್ನು ವಿಶೇಷವಾಗಿ, ವಿಸ್ತಾರವಾಗಿ ನಿರೂಪಿಸುವೆನು. ಇದರಿಂದ ಸರ್ವ ಸಂಶಯಗಳೂ ಸಮೂಲವಾಗಿ ನಿವಾರಣೆಯಾಗುತ್ತವೆ.

ಇವರ ಅಪಾರ ಮಹಿಮೆಯಿಂದ ಪ್ರಯತ್ನವಿಲ್ಲದೆ ಸಹಜವೆಂಬಂತೆ ಅತಿ ಅನಾಚಾರಿಗಳೂ, ಮೂಢರೂ, ಬಾಲಕರೂ, ಹಠವಾದಿಗಳೂ, ದರಿದ್ರರೂ, ಮಂದಮತಿಗಳೂ, ಅಲ್ಪವಂಶಜರೂ ಮುಂತಾದವರು ಸದಾಚಾರಿಗಳಾಗಿಯೂ, ಸಜ್ಜನರಾಗಿಯೂ, ಪ್ರೌಢ ಪಂಡಿತರಾಗಿಯೂ, ಸಾಧುಗಳಾಗಿಯೂ, ಭಾಗ್ಯವಂತರಾಗಿಯೂ, ಲೋಕಮಾನ್ಯರಾಗಿಯೂ, ಕುಲೀನ ಜನ ವಂದಿತರಾಗಿಯೂ ಮಾರ್ಪಟ್ಟಿದ್ದಾರೆ. ಇದನ್ನು ಅನೇಕರು ಸ್ಪಷ್ಟವಾಗಿ ನೋಡಿರುತ್ತಾರೆ.

ಇದೇ ತರಹ ಅಸಾಧ್ಯವಾದ, ಚಿಕಿತ್ಸಾರಹಿತವಾದ ಕುಷ್ಠಾದಿ ಅರಿಷ್ಟ ರೋಗಗಳು ಭಾರತೀಶನ ಶುಭ ನಾಮದಿಂದ ಈ ಗುರುಗಳು ಕರುಣಿಸಿದ ಗಂಧ, ಕಾಷ್ಠ, ಭಸ್ಮ, ಮೃತ್ತಿಕೆ, ಧೂಪ, ಧೂಮ ಮುಂತಾದ ಸಾಧನಗಳಿಂದಲೇ ಯೋಗ್ಯ ಜನರಿಗೆ ಪರಿಹಾರ ಮಾಡಲ್ಪಟ್ಟಿರುತ್ತವೆ. ಕೈ ಕಾಲು ಮುಂತಾದ ಅಂಗಗಳಲ್ಲಿ ನ್ಯೂನ್ಯತೆವುಳ್ಳವರು ಪೂರ್ಣಾಂಗರಾಗಿಯೂ, ದೃಷ್ಟಿಹೀನರು ದಿವ್ಯ ದೃಷ್ಟಿಯನ್ನು ಚಿರಕಾಲ ಪಡೆದವರಾಗಿಯೂ ಅಗಿರುತ್ತಾರೆ. ಒಬ್ಬಾನೊಬ್ಬ ಹುಟ್ಟು ಕುರುಡನು ಇವರ ಹಸ್ತದಿಂದ ದೃಷ್ಟಿ ಲಾಭ ಪಡೆದು ಕೆಲವು ಕಾಲ ಹಾಗೇ ಇದ್ದು ನಂತರ ತನ್ನ ಇಚ್ಛೆಯಂತೆ ಯಥಾಪ್ರಕಾರ ಮಾಡಲ್ಪಟ್ಟನು. ಇದೂ ಸಹ ಶ್ರೀ ಅಪ್ಪಾವರ ಮಹಿಮೆಯೇ ಆಗಿದೆ.

ಶ್ರೀ ಗುರುಗಳ ರಹಸ್ಯವಾದ ಅಲ್ಪ ವಾಕ್ಯದಿಂದಲೇ ದುಷ್ಟ ಪಂಡಿತರು ಖಂಡಿಸಲ್ಪಡುತ್ತಿದ್ದರು. ಸತ್ಪಂಡಿತರು ಮಂಡಿತರಾಗುತ್ತಿದ್ದರು. ಶ್ಲೋಕಾದಿಗಳನ್ನು ರಚಿಸುವುದರಲ್ಲಿ ಅಸಮರ್ಥರಾದವರೂ ಸಹ ಶ್ಲೋಕ ರಚನೆ ಮಾಡುವ ಸಾಮರ್ಥ್ಯ ಗಳಿಸುತ್ತಿದ್ದರು.

ಒಬ್ಬನು ತೀರ್ಥಕ್ಷೇತ್ರಯಾತ್ರೆ ಮಾಡಬೇಕೆಂಬ ಆತುರವುಳ್ಳವನಾಗಿ ಗುರುಗಳ

ಬಳಿ ಬಂದನು. ಗುರುಗಳು ಆ ವಿಷಯವನ್ನು ಅರಿತವರಾಗಿ ರಾತ್ರಿ ಆತನನ್ನು ತಮ್ಮ ತಲೆಯ ಸಮೀಪ ಮಲಗಿಸಿಕೊಂಡರು. ರಾತ್ರಿ ಅವನಿಗೆ ಸ್ವಪ್ನವಾಯಿತು. ಸ್ವಪ್ನದಲ್ಲಿ ಆತ ಸಮಸ್ತ ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸಿ, ಆಯಾ ತೀರ್ಥ ಕ್ಷೇತ್ರಗಳಲ್ಲಿ ನಡೆಸಬೇಕಾದ ವಿಧಿ ವಿಧಾನಗಳನ್ನು ಕ್ರಮಬದ್ಧವಾಗಿ ಆಚರಿಸಿ ಪುನಃ ಸ್ವಗ್ರಾಮಕ್ಕೆ ಮರಳಿ ಬಂದುದ್ದನ್ನು ಕಂಡನು. ಪ್ರಾತಃಕಾಲ ಗುರುಗಳು ಅವನನ್ನು ಎಬ್ಬಿಸಿ, ಅವನ ಮುಖಾಂತರ ಸ್ವಪ್ನದಲ್ಲಿ ಕಂಡಿದ್ದನ್ನೆಲ್ಲಾ ಹೇಳಿಸಿದರು. ಹೇಳುವಾಗ ಅವನು ನಾಚಿಕೆಯಿಂದ ಮತ್ತು ಮರೆತು ಹೇಳದೆ ಬಿಟ್ಟ ವಿಷಯವನ್ನೂ ಸಹ ಗುರುಗಳೇ ಪ್ರಸ್ತಾಪಿಸಿ ಹೇಳುವಂತೆ ಮಾಡಿದರಲ್ಲದೆ ಎಲ್ಲವನ್ನೂ ಸಂಪೂರ್ಣವಾಗಿ ಬರೆಯಿಸಿದರು. ಇದನ್ನು ಕಂಡು ಅಲ್ಲಿ ನೆರೆದಿದ್ದ ಸಮಸ್ತ ಜನರೂ ಆಶ್ಚರ್ಯ ಚಕಿತರಾದರು.

ಇದಲ್ಲದೆ ಮತ್ತೆ ಕೆಲವರಿಗೆ ದೇವತಾ ದರ್ಶನಾದಿಗಳನ್ನು ಮಾಡಿಸಿದರು. ಕೆಲವು ಸಜ್ಜನರಿಂದ ಆವರಗೆ ಎಂದೂ ಕಾಣದಿರುವಂತಹ ಮತ್ತು ಕೇಳರಿಯದಂತಹ ಶಾಸ್ತ್ರಾರ್ಥ ರಹಸ್ಯ ವಿಷಯಗಳನ್ನು ಕಥನ ಮಾಡಿಸಿದರು. ಕೆಲವರಿಗೆ ಸ್ವಪ್ನದಲ್ಲಿ, ಕೆಲವರಿಗೆ ಜಾಗ್ರದಾವಸ್ಥೆಯಲ್ಲಿ ಇದೆಲ್ಲಾ ಸ್ಪಷ್ಟವಾಗುವಂತೆ ತೋರಿದರು. ದುಷ್ಟ ಬುದ್ಧಿಯುಳ್ಳವರನ್ನು ಕೇವಲ ದರ್ಶನ ಮಾತ್ರದಿಂದಲೇ ತಿದ್ದಿ ಸದ್ಬುದ್ಧಿ ನೀಡಿದರು. ಭಕ್ತರು ಎಲ್ಲಿಯೇ ಇದ್ದರೂ ಗುರುಗಳು ಅವರಿರುವಲ್ಲಿ ವಿವಿಧ ಕಾರ್ಯಗಳನ್ನು ಮಾಡಿ ಅವರ ಮನೋವಾಂಛೆಗಳನ್ನು ಪೂರೈಸಿದರು. ಗುರುಗಳು ಕರುಣಿಸಿದ ಮಂತ್ರಾಕ್ಷತೆಯಿಂದ ಯುಕ್ತವಾದ ಸಂಪುಟವನ್ನು ಪೂಜೆ ಮಾಡಿದ ಭಕ್ತರಿಗೆ ಸ್ವಲ್ಪ ಕಾಲದಲ್ಲಿಯೇ ಸಂಪುಟದೊಳಗಿನ ಮಂತ್ರಾಕ್ಷತೆ ಅವರ ಇಷ್ಟದೇವತಾ ಪ್ರತಿಮೆಯಾಗಿ ಮಾರ್ಪಡುತ್ತಿತ್ತು.

ಗುರುಗಳ ಕೃಪೆಯಿಂದ ಒಂದೊಂದು ಕಡೆ ಸ್ವಪ್ನದಲ್ಲಿ ಲಬ್ಧವಾದ ವಸ್ತುಗಳೂ ಸಹ ಎಚ್ಚರವಾದ ಮೇಲೆ ಪ್ರತ್ಯಕ್ಷವಾಗಿ ದೊರಕುತ್ತಿದ್ದವು. ಒಬ್ಬನನ್ನು ನೋಡಿದ ಕೂಡಲೇ ಗುರುಗಳು ಏಳು ಜನ್ಮಗಳ ಸರ್ವ ಕರ್ಮ ವಿಪಾಕಗಳನ್ನೂ ಸ್ಪಷ್ಟವಾಗಿ ನೋಡಿರುವಂತೆ ಅನೇಕ ಪ್ರಾಜ್ಞರು ಕೇಳುತ್ತಿರುವ ಸಮಯದಲ್ಲಿ ಹೇಳಿದರು. ಮಹಾಮಂತ್ರವಾದಿಗಳಿಗೂ ಭಯಪ್ರದವಾದ ಪಿಶಾಚಿಗಳನ್ನು ಗುರುಗಳು ತಮ್ಮ ಸಹಜೋಕ್ತಿಗಳಿಂದ ಪರಿಹರಿಸಿದರು. ಬ್ರಹ್ಮಹತ್ಯಾದಿ ದೋಷಗಳನ್ನು ನಿವಾರಿಸಿದರು. ಪ್ರಜಾಪೀಡಕರಾದ, ಕ್ರೂರ ಕರ್ಮಿಗಳಾದ ದುಷ್ಟಜನರನ್ನು ಪ್ರಭುಗಳಾದ ಶ್ರೀ ಗುರುವರ್ಯರು ತಮ್ಮ ಅಲ್ಪ ವಚನದಿಂದಲೇ

ವಿವಶರನ್ನಾಗಿ ಮಾಡುತ್ತಿದ್ದರಲ್ಲದೆ ಅವರನ್ನು ನಿಯಂತ್ರಣ ಮಾಡಿ, ಅವರ ಮುಖದಿಂದಲೇ ಅವರ ಪ್ರಾಚೀನ ಕರ್ಮಗಳನ್ನು ಪ್ರಕಟಪಡಿಸುತ್ತಿದ್ದರು. ವಚನ ಮಾತ್ರದಿಂದಲೇ ಲೋಕದಲ್ಲಿ ತಮ್ಮ ಆಜ್ಞಾ ನಡೆಸುವ ವಿವೇಕಿಗಳನ್ನಾಗಿ ಪರಿವರ್ತಿಸಿದ ಗುರುಗಳಿಗೆ ಇದೊಂದೂ ಆಶ್ಚರ್ಯದ ವಿಷಯವಲ್ಲ ಆದರೆ ಇತರರಿಗೆ ಇದು ಆಶ್ಚರ್ಯದ ಸಂಗತಿಯಾಗುತ್ತಿತ್ತು. ಅನಾದಿ ಕಾಲದಿಂದಲೂ ಪ್ರಚ್ಛನ್ನವಾದ ಕೆಲವರ ಜೀವ ಸ್ವರೂಪಗಳನ್ನು ಕೇವಲ ಲೀಲೆಯಿಂದ ಹೇಳುತ್ತಿದ್ದ ಇವರು ಆ ಜೀವಿಗಳು ಮುಕ್ತಿಯೋಗ್ಯರೋ ಅಲ್ಲವೋ ಎಂಬುದನ್ನೂ ಸಹ ಸ್ಪಷ್ಟಪಡಿಸುತ್ತಿದ್ದರು.

ಇಭರಾಮಪುರಾಚಾರ್ಯರ ಶರೀರ ವಿವಿಧ ಸುಗಂಧ ಭರಿತ ಆನಂದಮಯ ಸದನ. ಇಚ್ಛಾಮಾತ್ರದಿಂದ ನಿರಾಯಾಸವಾಗಿ ಸುಗಂಧ ಹೊರ ಸೂಸುತ್ತಿದ್ದ ಇಂಥ ದೇಹವನ್ನು ಯಾರೂ ಇನ್ನೊಬ್ಬರಲ್ಲಿ ನೋಡಲಿಲ್ಲ, ಕೇಳಲಿಲ್ಲ. ಇವರು ನದಿ ಸ್ನಾನ ಮಾಡಿದಾಗ ಆ ಪ್ರದೇಶವೆಲ್ಲಾ ಸುಗಂಧಭರಿತವಾಗುತ್ತಿತ್ತು. ಕೆಲವರಿಗೆ ಇವರನ್ನು ಸ್ಮರಿಸಿದ ಮಾತ್ರಕ್ಕೇ ಎಲ್ಲೇ ಇದ್ದರೂ ದಿವ್ಯ ಪರಿಮಳವನ್ನು ಆಘ್ರಾಣಿಸಿದ ಅನುಭವವಾಗುತ್ತಿತ್ತು. ಕೆಲವು ಜನರಿಗೆ ಗುರುಗಳ ಪತ್ರಾಗಮನವೂ ಅನುಪಮ ಸುಗಂಧವನ್ನು ಹೊತ್ತು ತರುತ್ತಿತ್ತು. ಇವರ ಕುರಿತಾದ ಜ್ಞಾನದ ಅನುಭವ ಸತ್ಯಲೋಕದಿಂದ ಹಿಡಿದು ಪಾತಾಳದವರೆಗೂ ವ್ಯಾಪಿಸಿರುವ ಜ್ಞಾನಿಗಳಿಗೆ ಉಂಟಾಗುತ್ತಿತ್ತು. ಈ ಎಲ್ಲಾ ಮಹಿಮೆಗಳು ಜ್ಞಾನಿಗಳಿಂದ ಆಯಾ ಪ್ರಸಂಗಗಳಲ್ಲಿ ಮುಖ್ಯ ಪ್ರಾಣಾರ್ಚನ ದ್ವಾರ ಶ್ರೀ ಹರಿಯ ಪೂಜೆಯಿಂದ ತಿಳಿಸಲ್ಪಡುತ್ತಿತ್ತು. ಗುರುಗಳ ಉಪದೇಶ ಶ್ರೀ ಭಾರತೀಶಾರ್ಚನ ದ್ವಾರ ಲಭ್ಯವಾಗುವ ಹರಿಪೂಜೆಯ ಫಲವೇ ಆಗುತ್ತಿತ್ತು. ಮೋಕ್ಷಮಾರ್ಗಕ್ಕೆ ಮುಖ್ಯ ಹೇತುವಾಗಿ ಪರಿಣಮಿಸುತ್ತಿತ್ತು.

ಆದ್ದರಿಂದ ಈ ಗುರುಗಳ ಮಹಾತ್ಮೆಯನ್ನು ಸಂಪೂರ್ಣವಾಗಿ ವರ್ಣಿಸಲು ಎಂತಹ ಪಂಡಿತರಿಗೂ ಸಹ ಸಾಧ್ಯವಿಲ್ಲ. ಏಕೆಂದರೆ ಇದು ವೈವಿಧ್ಯಮಯವೂ, ಅಚಿಂತ್ಯಾದ್ಭುತವೂ ಆಗಿರುವಂಥದ್ದು. ಸಚ್ಛಾಸ್ತ್ರ ಸಮ್ಮತವೂ, ಜ್ಞಾನಿಗಳಿಂದ ಸ್ತುತ್ಯವೂ, ಭಕ್ತಜನರಿಂದ ಮತ್ತೆ ಮತ್ತೆ ಸ್ಮರಿಸುವಂಥದ್ದೂ ಆಗಿರುವ ಇದು ಅನುಭವ ಸಿದ್ಧವಾದದ್ದು; ಪ್ರತ್ಯಕ್ಷವಾಗಿ ನೋಡಿ, ಕೇಳಲ್ಪಟ್ಟಿದ್ದು. ಶಿಷ್ಯರಿಂದ ಸ್ಪಷ್ಟವಾಗಿ ಅನುಷ್ಠಿಸಲ್ಪಟ್ಟಿದ್ದು. ಆದ ಕಾರಣ ಯಾವುದೇ ಆತಂಕವಿಲ್ಲದೆ ಮೇಲೆ ಹೇಳಿದ ಪ್ರಮಾಣಬಲದಿಂದ, ಯುಕ್ತಿಗಳಿಂದ ಈ ಎಲ್ಲಾ ಮಹಿಮೆಗಳು

ಜ್ಞಾನಿಗಳಿಂದ ಶ್ರೀ ಕೃಷ್ಣಾಚಾರ್ಯರೆಂಬ ಗುರುವರ್ಯರಲ್ಲಿ ಸಮನ್ವಯ ಮಾಡಲ್ಪಟ್ಟಿವೆ ಎಂದು ತಿಳಿಯಬೇಕು.

ಈ ಗುರುವರ್ಯರ ಮಹಾತ್ಮೆಯನ್ನು ಯಾರು ಸ್ತೋತ್ರ ಮಾಡುವರೋ, ಶ್ರವಣ ಮಾಡುವರೋ ಅವರು ನಿಸ್ಸಂಶಯವಾಗಿ ತಮ್ಮ ಮುಂದಿನ ದೊಡ್ಡ ದೊಡ್ಡ ಸ್ಥಾನಗಳನ್ನು ಪಡೆದುಕೊಳ್ಳುತ್ತಾರೆ. ಈ ಮಹಾನುಭಾವರ ಮಹಿಮೆಗಳನ್ನು ತುಚ್ಛವಾಗಿ ಕಂಡು ಯಾರು ನಿಂದಿಸುವರೋ, ಅಪಹಾಸ್ಯ ಮಾಡುವರೋ ಅವರು ಸಹ ತಮಗೆ ಯೋಗ್ಯವಾದ ಉತ್ಕೃಷ್ಟ ಸ್ಥಾನವನ್ನೇ ಹೊಂದುತ್ತಾರೆ. ಇದಕ್ಕೆ ದೃಷ್ಟಾಂತವಾಗಿ ಹೇಳಬೇಕೆಂದರೆ ದೃಷ್ಟಿಯಿರುವ ಸಮಸ್ತ ಪ್ರಾಣಿಗಳಿಗೂ ಸೂರ್ಯೋದಯವಾದಾಗ ಸಂತೋಷವಾಗುತ್ತದೆ. ದೃಷ್ಟಿಹೀನರಾದವರು ಖಿನ್ನರಾಗುತ್ತಾರೆ. ಇದರಿಂದ ಸೂರ್ಯನ ಕಾಂತಿಗೆ ಕೊರತೆ ಉಂಟಾಗುವುದೇ? ಸಜ್ಜನರು ಅವರವರ ಯೋಗ್ಯತಾನುಸಾರ ಸಂತೋಷವನ್ನು ಹೊಂದಿದರೆ ಅಯೋಗ್ಯರು ದುಃಖವನ್ನೇ ಅನುಭವಿಸುವರು. ಇದರಿಂದ ಗುರುಗಳ ಕೀರ್ತಿಗೆ ಒಂದಿಷ್ಟೂ ಊನವಿಲ್ಲ. ಅವರವರ ಯೊಗ್ಯತೆಗನುಗುಣವಾಗಿ ಫಲಗಳು ಅವರವರಿಗೆ ಪ್ರಾಪ್ತವಾಗುವುವು.

ಜ್ಞಾನಿವರೇಣ್ಯ ಶ್ರೀಮದುಪಾಧ್ಯಾಯ ಗುರುಗಳ ಪಾದಸೇವಕನೂ, ಅವರ ಶಿಷ್ಯ ಕೋಟಿಯಲ್ಲಿ ಪ್ರವಿಷ್ಟನಾದವನೂ ಆದ ಅಲ್ಪಮತಿಯುಳ್ಳವನಿಂದ ಇಭರಾಮಪುರಾಚಾರ್ಯ ಶ್ರೀ ಕೃಷ್ಣಾಚಾರ್ಯರ ಮಹಿಮಾಸಾಗರದ ಒಂದು ಅಲ್ಪ ತರಂಗವು ಯಥಾಶಕ್ತಿ ವರ್ಣಿಸಲ್ಪಟ್ಟಿತು. ಇದರಿಂದ ಶ್ರೀ ಭಾರತೀಪತಿಯ ಪ್ರಸಾದ ದ್ವಾರ ದಯಾಳುವೂ, ದೀನವತ್ಸಲನೂ ಆದ ಶ್ರೀಪತಿಯು ಸಂತುಷ್ಟನಾಗಿ ಇಷ್ಟಾರ್ಥಪ್ರದನಾಗಲಿ.

ಯಾವ ಮನುಷ್ಯನು ಹೃದಯದಲ್ಲಿ ಶ್ರೀ ಗುರುಗಳ ಮಹಿಮೆಯನ್ನು ಭಕ್ತಿಯಿಂದ ಅನುಸಂಧಾನ ಮಾಡಿ ಮಹಿಮೋಪೇತವಾದ ಈ ಸ್ತೋತ್ರವನ್ನು ಪಠಣೆ ಮಾಡುವನೋ ಅವನು ಜ್ಞಾನವಂತನೂ, ಶ್ರೀಮಂತನೂ, ಪುತ್ರವಂತನೂ ಮತ್ತು ನಿರೋಗಿಯೂ ಆಗುವನು. ಈ ಸ್ತೋತ್ರವನ್ನು ಪಠಿಸುವುದರಿಂದ ಶ್ರುತಿ, ಸ್ಮೃತಿ, ಪುರಾಣ, ಇತಿಹಾಸಗಳ ಪಾಠ ಫಲವು ಪ್ರಾಪ್ತವಾಗುವುದು. ಸರ್ವ ಕಾರ್ಯಗಳಲ್ಲಿ ಯಶಸ್ಸು ಲಭ್ಯವಾಗುವುದು. ಇದನ್ನು ಪಠಿಸುವವನು ಭೂಮಿಯಲ್ಲಿ ಶ್ಲಾಘ್ಯನಾಗಿ ಸರ್ವ ಮಾನ್ಯನಾಗುವನು. ಅಲ್ಲದೆ

ಬಹು ಕಾಲದವರೆಗೆ ಇಹಲೋಕದಲ್ಲಿ ಸಕಲ ಭೋಗ ಭಾಗ್ಯಗಳನ್ನು ಅನುಭವಿಸಿ, ಪಾಪರಹಿತನಾಗಿ, ವೈಕುಂಠವನ್ನೇ ಪಡೆದುಕೊಳ್ಳುವನು. ಆದ್ದರಿಂದ ಸರ್ವ ಪ್ರಯತ್ನದಿಂದ, ಏಕಾಗ್ರತೆಯಿಂದ ಈ ಸ್ತೋತ್ರವನ್ನು ಪಠಿಸಬೇಕು. ಇದರಿಂದ ಸಮಸ್ತವೂ ಸಿದ್ಧಿಸುತ್ತದೆ. ಇದರಲ್ಲಿ ಯಾವ ಸಂದೇಹವೂ ಇಲ್ಲ.

ನಮ್ಮ ಉಪಾಧ್ಯಾಯರಿಂದ ಉಪಾಸಿತನಾದ, ಶ್ರೀ ಕೃಷ್ಣಾರ್ಯ ಗುರುವರ್ಯರ ಹೃದ್ಗತನಾದ, ಬ್ರಹ್ಮಾದಿಗಳಿಂದ ಸಂಸ್ತುತನಾದ ಶ್ರೀ ಲಕ್ಷ್ಮೀ ವೆಂಕಟೇಶ ಸ್ವಾಮಿ ಈ ಸ್ತೋತ್ರದಿಂದ ಪ್ರೀತನಾಗಲಿ. ಪಾವನಾತಿಪಾವನವಾದ ಈ ಸ್ತೋತ್ರವು ಶ್ರೀ ಯೋಗಿ ನಾರಾಯಣಾಚಾರ್ಯರಿಂದ (ನಿರ್ನಿಮಿತ್ತ ಕೃಪಾ ದೃಷ್ಟಿಯಿಂದ) ಸಜ್ಜನರ ಉಪಕಾರಕ್ಕಾಗಿ ಮಾಡಲ್ಪಟ್ಟಿವೆ.

ಶ್ರೀ ಯೋಗಿ ನಾರಾಯಣಾಚಾರ್ಯರಿಂದ ರಚಿತವಾದ ಶ್ರೀ ಇಭರಾಮಪುರ ಕೃಷ್ಣಾಚಾರ್ಯ ಸ್ತೋತ್ರಮಾಲೆ ಸಂಪೂರ್ಣವಾಯಿತು.

॥ ಶ್ರೀಮಧ್ವಾಂತರ್ಗತ ಶ್ರೀ ಕೃಷ್ಣಾರ್ಪಣಮಸ್ತು ॥

ಹರಿಃ ಓಂ

❖ ❖ ❖